

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 250 (1729+1851)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಅರಣ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

ವಿಷಯ : ಕೊಡಗು ಜಿಲ್ಲೆಯ ಮಡಿಕೇರಿ ನಗರದಲ್ಲಿರುವ ಜನರಲ್ ತಿಮ್ಮಯ್ಯ ಮ್ಯೂಸಿಯಂ ಕುರಿತು

(ಅ) ಕೊಡಗು ಜಿಲ್ಲೆಯ ಮಡಿಕೇರಿ ನಗರದಲ್ಲಿರುವ ಜನರಲ್ ತಿಮ್ಮಯ್ಯ ಮ್ಯೂಸಿಯಂ ನ ಮುಂದಿನ ಕಾರ್ಯನಿರ್ವಹಣೆಗಾಗಿ ಬೇಕಾಗಿರುವ ಖರ್ಚು ವೆಚ್ಚಗಳನ್ನು ಭರಿಸಲು ಹಾಗೂ ರಕ್ಷಣೆ, ಭದ್ರತೆ ಮತ್ತು ಸೂಕ್ತ ನಿರ್ವಹಣೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು;

(ಆ) ಜನರಲ್ ತಿಮ್ಮಯ್ಯ ಮ್ಯೂಸಿಯಂ ನಿರ್ಮಾಣದ ಅಂದಾಜು ಮೊತ್ತ ಬಿಡುಗಡೆಯಾಗಿರುವ ಅನುದಾನ, ವಿನಿಯೋಗಿಸಿರುವ ಮತ್ತು ಬಾಕಿ ಇರುವ ಅನುದಾನದ ವಿವರಗಳೇನು;

(ಇ) ಯೋಜನೆಯ ನೀಲಿನಕ್ಷೆಯಂತೆ ಎಲ್ಲಾ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗಿದೆಯೇ; ಇಲ್ಲದಿದ್ದಲ್ಲಿ, ಬಾಕಿ ಇರುವ ಕಾಮಗಾರಿಗಳ ವಿವರಗಳೇನು; ಸದರಿ ಕಾಮಗಾರಿಗಳಿಗೆ ಬೇಕಾಗಿರುವ ಅನುದಾನವೆಷ್ಟು; ಬಾಕಿ ಇರುವ ಕಾಮಗಾರಿಗಳನ್ನು ಯಾವ ಕಾಲಮಿತಿಯೊಳಗೆ ಪೂರ್ಣ ಮಾಡಲಾಗುವುದು;

(ಈ) ಸದರಿ ಮ್ಯೂಸಿಯಂನ ನಿರ್ವಹಣೆಗೆ ನಿವೃತ್ತ ಸೇನಾ ಅಧಿಕಾರಿಗಳನ್ನು ಖಾಯಂ ಆಗಿ ನೇಮಿಸಿ, ಆ ಮೂಲಕ ಅವರ ಅನುಭವವನ್ನು ಸಂಪೂರ್ಣವಾಗಿ ಬಳಸಿಕೊಂಡು, ವಿಶ್ವದ ಮಾದರಿ ಮ್ಯೂಸಿಯಂ ಮಾಡುವಲ್ಲಿ ಸರ್ಕಾರ ಕೂಡಲೇ ಕ್ರಮವಹಿಸುವುದೇ;

(ಉ) ಈ ಮ್ಯೂಸಿಯಂಗೆ ಭೇಟಿ ನೀಡುವ ಎಲ್ಲ ಮಕ್ಕಳಿಗೆ ಎಲ್ಲಾ ಕಾಲದಲ್ಲೂ ಉಚಿತ ಪ್ರವೇಶವನ್ನು ನೀಡಲು ಸರ್ಕಾರದ ನಿಲುವೇನು?